ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಶುಕ್ರವಾರ, ದಿನಾಂಕ 19ನೇ ಜುಲೈ, 2019

ನೈಸ್ ಸಂಸ್ಥೆಯ ಅಕ್ರಮಗಳ ಕುರಿತು

ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು):-

401 (217) ಮಾನ್ಯ ಲೋಕೋಪಯೋಗಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ನೈಸ್ ಸಂಸ್ಥೆಯೊಂದಿಗೆ ದಿನಾಂಕ: 03-04-1997 ರ ಕ್ರಿಯಾ ಒಪ್ಪಂದದಂತೆ ಎಲ್ಲಾ ಟೋಲ್ ರಸ್ತೆಗಳನ್ನು ಸಿಮೆಂಟ್ ಕಾಂಕ್ರೀಟ್ ರಸ್ತೆಯಾಗಿ ನಿರ್ಮಿಸಬೇಕಾಗಿದ್ದು, ಒಪ್ಪಂದ ಉಲ್ಲಂಘಿಸಿರುವ ಕಾರಣ ಯಾವ ಕ್ರಮಕೈಗೊಳ್ಳಲಾಗಿದೆ ;

(ಆ) ನೈಸ್ ಸಂಸ್ಥೆಯೊಂದಿಗೆ ದಿನಾಂಕ: 03-04-1997 ರ ಕ್ರಿಯಾ ಒಪ್ಪಂದದಂತೆ ಕಾರ್ಯ ನಿರ್ವಹಿಸದಿರುವ ಕುರಿತು ಕ್ರಿಮಿನಲ್ ಪ್ರಕರಣ ದಾಖಲು ಮಾಡಲಾಗಿದೆಯೇ ; ಒಪ್ಪಂದದಂತೆ ಕಾರ್ಯ ನಿರ್ವಹಿಸದಿರುವವರ ಮೇಲೆ ಯಾವ ಕ್ರಮ ಕೈಗೊಳ್ಳಲಾಗಿದೆ ;

(ಇ) ರಾಜ್ಯದ ಜನತೆಗೆ ಮೋಸ ಮಾಡಿರುವ ಬಗ್ಗೆ ನೈಸ್ ಸಂಸ್ಥೆಯ ಮೇಲೆ ರಾಜದ್ರೋಹದ ಪ್ರಕರಣ ದಾಖಲಿಸಲು ಸರ್ಕಾರ ಯಾವ ಕ್ರಮ ಕೈಗೊಂಡಿದೆ ; ಈ ಕುರಿತು ಕ್ರಮ ಕೈಗೊಳ್ಳಲು ನಿರ್ಲಕ್ಷ ತೋರಿದ ಅಧಿಕಾರಿಗಳ ಮೇಲೆ ವಿಚಾರಣೆಗೆ ಆದೇಶ ನೀಡಲಾಗಿದೆಯೇ ;

(ಈ) ರಾಜ್ಯದ ಜನತೆಗೆ ಮೋಸ ಮಾಡಿದ ಬಳಿಕವೂ ಟೋಲ್ ಸಂಗ್ರಹಿಸುತ್ತಿರುವುದು ಅಕ್ಷಮ್ಯ ಅಪರಾಧವಾಗಿದ್ದು, ನೈಸ್ ರಸ್ತೆಯಲ್ಲಿ ಟೋಲ್ ಸಂಗ್ರಹವನ್ನು ನಿಲ್ಲಿಸಲು ಯಾವ ಕ್ರಮ ಕೈಗೊಳ್ಳಲಾಗಿದೆ ?